# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1364 (ಕಂದಾಯ ಇಲಾಖೆಯಿಂದ ವರ್ಗಾಯಿತ ಪ್ರಶ್ನೆ) |
| ಸದಸ್ಯರ ಹೆಸರು | : | ಶ್ರೀ ಎಂ.ಎಲ್. ಅನಿಲ್ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 09-03-2022 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಪ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು/ಮಾಲೂರು/ ಬಂಗಾರಪೇಟೆ/ಕೆ.ಜಿ.ಎಫ್. ತಾಲ್ಲೂಕುಗಳ ಮೂಲಕ ಹಾದುಹೋಗುವ ಚೆನ್ನೈ ಎಕ್ಸ್‌ಪ್ರೆಸ್ ಕಾರಿಡಾರ್ ರಸ್ತೆಗೆ ಸ್ವಾಧೀನಪಡಿಸಿ ಕೊಳ್ಳುತ್ತಿರುವ ಭೂಮಿ ಎಷ್ಟು; (ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ತಾಲ್ಲೂಕುವಾರು ಮಾಹಿತಿ ನೀಡುವುದು) | ಚೆನ್ನೈ ಎಕ್ಸ್‌ಪ್ರೆಸ್ ಕಾರಿಡಾರ್ ಯೋಜನೆಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ವತಿಯಿಂದ ಕೈಗೊಳ್ಳಲಾಗುತ್ತಿದ್ದು, ಅವರು ನೀಡಿರುವ ವಿವರಗಳಂತೆ ಬೆಂಗಳೂರು/ಮಾಲೂರು/ ಬಂಗಾರಪೇಟೆ/ ಕೆ.ಜಿ.ಎಫ್. ತಾಲ್ಲೂಕುಗಳ ಮೂಲಕ ಹಾದುಹೋಗುವ ಬೆಂಗಳೂರು-ಚೆನ್ನೈ ಎಕ್ಸ್‌ಪ್ರೆಸ್ ವೇ (NE-7) ಯೋಜನೆಗೆ ಕರ್ನಾಟಕ ಸೆಕ್ಷನ್‌ನಲ್ಲಿ ಒಟ್ಟು 817.60 ಹೆಕ್ಟೇರ್ ವಿಸ್ತೀರ್ಣ ಸ್ವಾಧೀನವಾಗಿದೆ.<br><br>ಕೋಲಾರ ಜಿಲ್ಲೆಯಲ್ಲಿ ಒಟ್ಟು 666.28 ಹೆಕ್ಟರ್ ವಿಸ್ತೀರ್ಣ ಭೂ ಸ್ವಾಧೀನಪಡಿಸಿಕೊಳ್ಳಲಾಗಿದೆ. ತಾಲ್ಲೂಕುವಾರು ಈ ಕೆಳಕಂಡಂತಿದೆ. |

| ಕೋಲಾರ ಜಿಲ್ಲೆಯ ತಾಲ್ಲೂಕುಗಳು | 3ಜಿ ಪ್ರಕಾರ ವಿಸ್ತೀರ್ಣ (ಹೆ) |
|---|---|
| ಮಾಲೂರು | 198.42 |
| ಕೋಲಾರ | 17.63 |
| ಬಂಗಾರಪೇಟೆ/ಕೆ.ಜಿ.ಎಫ್ | 439.23 |
| ಮುಳಬಾಗಿಲು | 11.00 |
| **ಒಟ್ಟು** | **666.28** |

| ಪ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ. | ಸದರಿ ಜಮೀನು ಮಾಲೀಕರುಗಳಿಗೆ ನೀಡುತ್ತಿರುವ ಪರಿಹಾರ ಗಳೇನು; ಕೋಲಾರ ಜಿಲ್ಲೆಯಲ್ಲಿ ಈವರೆಗೂ ಪರಿಹಾರ ಪಡೆದಿರುವ ಹಾಗೂ ಪರಿಹಾರ ನೀಡಬೇಕಾಗಿರುವ ಪ್ರಕರಣಗಳೆಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ವಿಶೇಷ ಭೂಸ್ವಾಧಿನಾಧಿಕಾರಿಗಳು ಹಾಗೂ ಸಕ್ಷಮ ಪ್ರಾಧಿಕಾರಿಗಳು, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, (ಬೆಂಗಳೂರು-ಚೆನ್ನೈ ಎಕ್ಸ್‌ಪ್ರೆಸ್ ವೇ) ಹೆಬ್ಬಾಳ, ಬೆಂಗಳೂರು ರವರಿಂದ ಸದರಿ ಕಾಮಗಾರಿಯ ಭೂಸ್ವಾಧೀನದ ವಿವರಗಳ ಬಗ್ಗೆ ಪಡೆದುಕೊಂಡ ಮಾಹಿತಿಯು ಈ ಕೆಳಗಿನಂತಿರುತ್ತದೆ.<br><br>ಭೂಸ್ವಾಧೀನದ ಜಮೀನುಗಳಿಗೆ RFCTLARR-2013 ರ ಕಾಯ್ದೆ ಪ್ರಕಾರ ಪರಿಹಾರವನ್ನು ಪಾವತಿಸಲಾಗುತ್ತಿದೆ. |

(ರೂ. ಕೋಟಿಗಳಲ್ಲಿ)

| ಕೋಲಾರ ಜಿಲ್ಲೆಯ ತಾಲ್ಲೂಕುಗಳು | ಒಟ್ಟು ಪ್ರಕರಣಗಳ ಸಂಖ್ಯೆ | ಭೂಸ್ವಾಧೀನಾಧಿಕಾರಿ ಘೋಷಿಸಿರುವ ಪರಿಹಾರ ಮೊತ್ತ | ಭೂಪರಿಹಾರ ವಿತರಿಸ ಲಾದ ಪ್ರಕರಣಗಳ ಸಂಖ್ಯೆ | ವಿತರಿಸ ಲಾದ ಪರಿಹಾರ ಮೊತ್ತ | ಭೂಪರಿಹಾರ ವಿತರಿಸ ಬೇಕಾದ ಪ್ರಕರಣಗಳ ಸಂಖ್ಯೆ | ವಿತರಿಸ ಬೇಕಾದ ಪರಿಹಾರ ಮೊತ್ತ |
|---|---|---|---|---|---|---|
| ಮಾಲೂರು | 380 | 336.90 | 311 | 260.47 | 69 | 76.43 |
| ಕೋಲಾರ | 15 | 7.36 | 7 | 4.04 | 8 | 3.32 |
| ಬಂಗಾರಪೇಟೆ/ ಕೆ.ಜಿ.ಎಫ್ | 1000 | 177.30 | 743 | 117.20 | 257 | 60.10 |
| ಮುಳಬಾಗಿಲು | 7 | 7.75 | 2 | 0.59 | 5 | 7.15 |
| **ಒಟ್ಟು** | **1402** | **529.31** | **1063** | **382.30** | **339** | **147.00** |

| | | |
|---|---|---|
| ಇ | ಸುಮಾರು 50–60 ವರ್ಷಗಳಿಂದ ಸ್ವಾಧೀನದಲ್ಲಿರುವ ರೈತರ ಪಹಣಿಗಳಲ್ಲಿ "ಪಿ' ಎಂದು ನಮೂದಾಗಿರುವ ಭೂ ಮಾಲೀಕರಿಗೆ ಪರಿಹಾರ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಈ. | ಬಂದಿದ್ದಲ್ಲಿ, ಸದರಿ ರೈತರಿಗೆ ಪರಿಹಾರ ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಜಿಲ್ಲಾವಾರು ಮಾಹಿತಿ ನೀಡುವುದು) | ಪೋಡಿ ದುರಸ್ತಿ ಆಗದೇ ಇರುವುದರಿಂದ ಖಾತೆದಾರರಿಗೆ ಪರಿಹಾರ ನೀಡಲು ಸಾಧ್ಯವಾಗಿರುವುದಿಲ್ಲ. ಈ ಕುರಿತು ಮಾನ್ಯ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಮಾನ್ಯ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಸಂಬಂಧಪಟ್ಟ ಕೋಲಾರ ಜಿಲ್ಲೆಯ ತಹಸೀಲ್ದಾರರು ಹಾಗೂ ಸಹಾಯಕ ಭೂ ದಾಖಲೆಗಳ ನಿರ್ದೇಶಕರುಗಳಿಗೆ ನಿರಂತರವಾಗಿ ಪತ್ರ ವ್ಯವಹಾರಗಳನ್ನು ಮಾಡಲಾಗುತ್ತಿದೆ. ಈ ಬಗ್ಗೆ ಮಾನ್ಯ ಜಿಲ್ಲಾಧಿಕಾರಿಗಳು ಭೂ ಸ್ವಾಧೀನಕ್ಕೆ ಸಂಬಂಧಪಟ್ಟಂತೆ ನಡೆಸುತ್ತಿರುವ ಪ್ರತಿ ಸಭೆಗಳಲ್ಲೂ ಸಹ ಪ್ರಸ್ತಾವನೆಗಳನ್ನು ಮಂಡಿಸಲಾಗುತ್ತಿದ್ದು, ಪೋಡಿ ದುರಸ್ತಿ ಕಾರ್ಯಗಳನ್ನು ತುರ್ತಾಗಿ ಮಾಡಿ ಕಂದಾಯ ದಾಖಲೆಗಳನ್ನು ಸಲ್ಲಿಸಲು ಕೋರಲಾಗಿದೆ. |

ಕಡತ ಸಂಖ್ಯೆ: ಲೋಇ 91 ಸಿಎನ್‌ಹೆಚ್ 2022 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು